

# ಕರ್ನಾಟಕ ವಿಧಾನ ಪರಿಷತ್

ಸದಸ್ಯರ ಹೆಸರು : ಶ್ರೀ ಎಂ. ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 476

ಉತ್ತರಿಸಬೇಕಾದ ದಿನಾಂಕ : 15.09.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ಕಾಯ್ದೆ ಜಾರಿಗೆ ಬಂದಿದ್ದು, ಇದರಿಂದ ರೈತರು ಸಾಕುವ ವಿದೇಶಿ ತಳಿಯ ಗಂಡು ಕರುಗಳನ್ನು ಗೋಶಾಲೆಗಳ ಮುಂದೆ ಬಿಟ್ಟು ಹೋಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಿಂದ ತಾಯಿಂದ ಹಾಲು ಕರುಗಳಿಗೆ ಸಿಗದೇ ಅವುಗಳ ಆರೋಗ್ಯದಲ್ಲಿ ರೋಗ ನಿರೋಧಕ ಶಕ್ತಿ ಇಲ್ಲದೇ ಸಾವಿಗೀಡಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರೈತ್ತರು ಸಾಕುವ ವಿದೇಶಿ ತಳಿ ಗಂಡು ಕರುಗಳನ್ನು ಕೆಲವೊಂದು ಸ್ಥಳಗಳಲ್ಲಿ ಗೋಶಾಲೆ ಮತ್ತು ಇತರೆ ಸ್ಥಳಗಳಲ್ಲಿ ಬಿಟ್ಟು ಹೋಗಿರುವುದು ಗಮನಕ್ಕೆ ಬಂದಿರುತ್ತದೆ. ಅಂತಹ ಸಂದರ್ಭಗಳಲ್ಲಿ ಇಲಾಖೆಯಿಂದ ಅಂತಹ ಕರುಗಳನ್ನು ಗೋಶಾಲೆಗೆ ಸೇರಿಸಿ ಆಶ್ರಯ ನೀಡಲಾಗಿದೆ. ಗೋಶಾಲೆಯಲ್ಲಿರುವ ಇಂಥಹ ಜಾನುವಾರುಗಳ ನಿರ್ವಹಣೆಗಾಗಿ ಪ್ರತಿ ಗೋಶಾಲೆಯ ಗರಿಷ್ಠ 200 ಜಾನುವಾರುಗಳಿಗೆ ಪ್ರತಿ ದಿನಕ್ಕೆ ರೂ.17.50 ರಂತೆ ಅನುದಾನ ನೀಡಲಾಗಿದೆ. |
| ಆ | ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ಕಾಯ್ದೆ ಜಾರಿಗೆ ತಂದ ಮೇಲೆ ಗಂಡು ಕರುಗಳನ್ನು ಗೋಶಾಲೆಗಳ ಮುಂದೆ ಬಿಟ್ಟು ಹೋಗುತ್ತಿರುವ ಕಾರಣ, ಗೋಶಾಲೆಗಳ ನಿರ್ವಹಣೆ ಮಾಡಲು ತುಂಬಾ ಕಷ್ಟವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಜಾನುವಾರು ಹತ್ಯೆ ಪ್ರತಿಬಂಧಕ ಮತ್ತು ಸಂರಕ್ಷಣಾ ಕಾಯ್ದೆ ಜಾರಿಗೆ ತಂದ ಮೇಲೆ ಗಂಡು ಕರುಗಳನ್ನು ಗೋಶಾಲೆಗಳ ಮುಂದೆ ಬಿಟ್ಟುಹೋಗುತ್ತಿರುವ ಕಾರಣ ರಾಜ್ಯದಲ್ಲಿರುವ ಗೋಶಾಲೆಗಳಲ್ಲಿರುವ ಜಾನುವಾರುಗಳ ನಿರ್ವಹಣೆ ಮಾಡಲು 2021-22ನೇ ಸಾಲಿನಲ್ಲಿ ರೂ.181,81,887.00ಗಳನ್ನು ಬಿಡುಗಡೆ ಮಾಡಲಾಗಿದೆ. |
| ಇ | ಬಂದಿದ್ದಲ್ಲಿ, ಇನ್ನು ಎಷ್ಟು ಗೋಶಾಲೆಗಳನ್ನು ತೆರೆಯುವ ಅವಶ್ಯಕತೆ ಇದೆ; ಇವುಗಳನ್ನು ಯಾವ ಕಾಲಮಿತಿಯಲ್ಲಿ ತೆರೆಯಲು ಯೋಜನೆ ರೂಪಿಸಿ ಕೊಂಡಿದೆ? | 2021-22ನೇ ಸಾಲಿನ ಆಯುವ್ಯಯದಲ್ಲಿ ಘೋಷಣೆಯಾದ ನೂತನ ಯೋಜನೆ ಅಡಿಯಲ್ಲಿ ಪ್ರತಿ ಜಿಲ್ಲೆಗೆ ಒಂದು ಗೋಶಾಲೆಯನ್ನು ಪ್ರಾರಂಭಿಸಲು ಘೋಷಿಸಲಾಗಿದ್ದು, ಗೋಶಾಲೆಗೆ ಅವಶ್ಯಕವಿರುವ ಜಾಗವನ್ನು ಗುರುತಿಸುವ ಮತ್ತು ಇಲಾಖೆಯ ವಶಕ್ಕೆ ಪಡೆಯುವ ಪ್ರಕ್ರಿಯೆ ಜಾರಿಯಲ್ಲಿ ಇರುತ್ತದೆ.<br><br>ಈಗಾಗಲೇ 11 ಜಿಲ್ಲೆಗಳಲ್ಲಿ ಜಾಗ ಗುರುತಿಸಲಾಗಿದ್ದು, ಗೋಶಾಲ ಪ್ರಾರಂಭಿಸುವ ಪ್ರಕ್ರಿಯೆ ಜಾರಿಯಲ್ಲಿ ಇರುತ್ತದೆ. |

ಪಸಂಮೀ ಇ-224 ಸಲೆವಿ 2021

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು.